# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **1586**
**ಸದಸ್ಯರ ಹೆಸರು** : ಶ್ರೀ ಸಿ.ಆರ್.ಮನೋಹರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 18.03.2021
**ಉತ್ತರಿಸುವ ಸಚಿವರು** : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | 2015ನೇ ಸಾಲಿನಲ್ಲಿ ರಾಜ್ಯದ ವಿವಿಧ ಎಸ್ಕಾಂಗಳಲ್ಲಿ ನೇರ ನೇಮಕಾತಿಯಡಿಯಲ್ಲಿ ಎಷ್ಟು ಸಹಾಯಕ ಇಂಜಿನಿಯರ್ (ವಿ)/(ಕಾ) ಕಿರಿಯ ಇಂಜಿನಿಯರ್ (ವಿ) ಮತ್ತು ಸಹಾಯಕ ಲೆಕ್ಕಾಧಿಕಾರಿಗಳನ್ನು ನೇಮಕ ಮಾಡಿಕೊಳ್ಳಲಾಗಿದೆ: | 2015 ನೇ ಸಾಲಿನಲ್ಲಿ ರಾಜ್ಯದ ವಿವಿಧ ಎಸ್ಕಾಂಗಳಲ್ಲಿ ಮತ್ತು ಕವಿಪ್ರನಿನಿಯಲ್ಲಿ ನೇರ ನೇಮಕಾತಿಯಡಿಯಲ್ಲಿ ನೇಮಕಗೊಂಡಿರುವ ಸಹಾಯಕ ಇಂಜಿನಿಯರ್(ವಿ) / (ಸಿವಿಲ್), ಕಿರಿಯ ಇಂಜಿನಿಯರ್(ವಿ) / (ಸಿವಿಲ್) ಮತ್ತು ಸಹಾಯಕ ಲೆಕ್ಕಾಧಿಕಾರಿಗಳ ವಿವರಗಳನ್ನು **ಅನುಬಂಧದಲ್ಲಿ** ಒದಗಿಸಲಾಗಿದೆ. |
| ಆ) | ಈಗಾಗಲೇ ನೇಮಕಾತಿಗೊಂಡಿರುವ ಅಧಿಕಾರಿಗಳ 6 ವರ್ಷ ಸೇವಾ ಅವಧಿ ಪೂರ್ಣಗೊಂಡಿರುವುದರಿಂದ, ದಿನಾಂಕ:04.02.2015 ರ ಇಂಧನ ಇಲಾಖೆಯ "ನೌಕರರಿಂದ ಸಹಮತ ಪಡೆದು ಕಂಪನಿವಾರು ಮರು ನಿಯೋಜನೆ ಮಾಡುವ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಇನ್ನು ಮುಂದೆ ಹೊಸದಾಗಿ ನೇಮಕಗೊಳ್ಳುವ ಅಧಿಕಾರಿಗಳ / ನೌಕರರಿಗೆ ಬಡ್ತಿ ನೀಡುವ ಅನಿವಾರ್ಯತೆ ಬಂದಾಗ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಸಂಬಂಧಪಟ್ಟ ಎಸ್ಕಾಂಗಳ ವ್ಯವಸ್ಥಾಪಕ ನಿರ್ದೇಶಕರುಗಳು ಪರಸ್ಪರ ಸಮಲೋಚಿಸಿ ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳತಕ್ಕದ್ದು" ಎಂದು ಮಾರ್ಗ ಸೂಚಿಯನ್ನು ನೀಡಿರುತ್ತಾರೆ ಹಾಗೂ "ಮಾರ್ಗಸೂಚಿಗಳು ಬೆಂಗಳೂರು ವಿದ್ಯುತ್ ಕಂಪನಿಯಲ್ಲಿ ಹೈದ್ರಾಬಾದ್-ಕರ್ನಾಟಕ (371ಜೆ) ಪ್ರದೇಶದ ಅಡಿಯಲ್ಲಿ ನೇಮಕಾತಿಗೆ ಹಾಗೂ ಜೆಸ್ಕಾಂಗೆ ಅನ್ವಯಿಸತಕ್ಕದ್ದಲ್ಲ" ಎಂದು ತಿಳಿಸಿರುವುದರಿಂದ 2015ನೇ ಸಾಲಿನಲ್ಲಿ ನೇರ ನೇಮಕಾತಿಗೊಂಡ ಸಹಾಯಕ ಇಂಜಿನಿಯರ್ (ವಿ) / (ಕಾ) ಕಿರಿಯ ಇಂಜಿನಿಯರ್ (ವಿ) ಮತ್ತು ಸಹಾಯಕ ಲೆಕ್ಕಾಧಿಕಾರಿಗಳ ಬಡ್ತಿ ವಿಷಯದಲ್ಲಿ ಸರ್ಕಾರ ಕೈಗೊಂಡ ಕ್ರಮಗಳು ಹಾಗೂ ಮುಂದಿನ ಕ್ರಿಯಾ ಯೋಜನೆಗಳೇನು? | ದಿನಾಂಕ:04.02.2015 ರ ಪತ್ರದಲ್ಲಿನ ಸರ್ಕಾರದ ಸೂಚನೆಯಂತೆ ನೌಕರರಿಂದ ಸಹಮತವನ್ನು ಪಡೆದು ಕಂಪನಿವಾರು ಮರು ನಿಯೋಜನೆ ಮಾಡುವ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ, ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಸಹಾಯಕ ಇಂಜಿನಿಯರ್ (ವಿ) (ಸಿವಿಲ್), ಕಿರಿಯ ಇಂಜಿನಿಯರ್(ವಿ) ಮತ್ತು ಸಹಾಯಕ ಲೆಕ್ಕಾಧಿಕಾರಿಗಳ ಹುದ್ದೆಗಳಿಗೆ 2015 ನೇ ಸಾಲಿನಲ್ಲಿ ನೇರ ನೇಮಕಾತಿ ಮೂಲಕ ನೇಮಕಗೊಂಡು ಬಡ್ತಿಗೆ ಅರ್ಹರಿರುವ ವಿಷಯವನ್ನು ಕವಿಪ್ರನಿನಿಯ ವ್ಯವಸ್ಥಾಪಕ ನಿರ್ದೇಶಕರು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳ ವ್ಯವಸ್ಥಾಪಕ ನಿರ್ದೇಶಕರುಗಳೊಂದಿಗೆ ಚರ್ಚಿಸಿ, ನಂತರ ಮುಂದಿನ ಕ್ರಮಗಳನ್ನು ಜರುಗಿಸಲಾಗುವುದು |

ಸಂಖ್ಯೆ: ಎನರ್ಜಿ 75 ಇಬಿಎಸ್ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸಿ.ಆರ್.ಮನೋಹರ್ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1586ಕ್ಕೆ ಅನುಬಂಧ

2015 ನೇ ಸಾಲಿನಲ್ಲಿ ರಾಜ್ಯದ ವಿವಿಧ ಎಸ್ಕಾಂಗಳಲ್ಲಿ ಮತ್ತು ಕವಿಪ್ರನಿನಿಯಲ್ಲಿ ನೇರ ನೇಮಕಾತಿಯಡಿಯಲ್ಲಿ ನೇಮಕಗೊಂಡಿರುವ ಸಹಾಯಕ ಇಂಜಿನಿಯರ್ (ವಿ)/(ಸಿವಿಲ್), ಕಿರಿಯ ಇಂಜಿನಿಯರ್ (ವಿ)/(ಸಿವಿಲ್) ಮತ್ತು ಸಹಾಯಕ ಲೆಕ್ಕಾಧಿಕಾರಿಗಳ ವಿವರಗಳು

| ಕ್ರ. ಸಂ | ಹುದ್ದೆಯ ಹೆಸರು | ಕೆ.ಪಿ.ಟಿ.ಸಿ.ಎಲ್. | | ಬೆ.ವಿ.ಸ.ಕಂ. | | ಚಾವಿ.ಸ.ನಿ. | ಮ.ವಿ.ಸ.ಕಂ. | ಹು.ವಿ.ಸ.ಕಂ. | ಗು.ವಿ.ಸ.ಕಂ. | ಒಟ್ಟು | |
|---|---|---|---|---|---|---|---|---|---|---|---|
| | | ನೇಮಕಾತಿಗೊಂಡ ಅಭ್ಯರ್ಥಿಗಳ ಸಂಖ್ಯೆ | | ನೇಮಕಾತಿಗೊಂಡ ಅಭ್ಯರ್ಥಿಗಳ ಸಂಖ್ಯೆ | | ನೇಮಕಾತಿಗೊಂಡ ಅಭ್ಯರ್ಥಿಗಳ ಸಂಖ್ಯೆ | ನೇಮಕಾತಿ ಗೊಂಡ ಅಭ್ಯರ್ಥಿಗಳ ಸಂಖ್ಯೆ | ನೇಮಕಾತಿ ಗೊಂಡ ಅಭ್ಯರ್ಥಿಗಳ ಸಂಖ್ಯೆ | ನೇಮಕಾತಿ ಗೊಂಡ ಅಭ್ಯರ್ಥಿಗಳ ಸಂಖ್ಯೆ | ನೇಮಕಾತಿಗೊಂಡ ಅಭ್ಯರ್ಥಿಗಳ ಸಂಖ್ಯೆ | |
| | | NHK | HK | NHK | HK | | | | | NHK | HK |
| 1 | ಸಹಾಯಕ ಇಂಜಿನಿಯರ್(ವಿ) | 341 | 68 | 70 | 12 | 38 | 46 | 84 | 50 | 629 | 80 |
| 2 | ಸಹಾಯಕ ಇಂಜಿನಿಯರ್(ಸಿವಿಲ್) | 4 | 0 | 2 | 1 | 1 | 1 | 1 | 1 | 10 | 1 |
| 3 | ಸಹಾಯಕ ಲೆಕ್ಕಾಧಿಕಾರಿ | 13 | 2 | 10 | 3 | 2 | 3 | 2 | 3 | 33 | 5 |
| 4 | ಕಿರಿಯ ಇಂಜಿನಿಯರ್(ವಿ) | 444 | 32 | 5 | 16 | 0 | 5 | 5 | 3 | 462 | 48 |
| 5 | ಕಿರಿಯ ಇಂಜಿನಿಯರ್(ಸಿವಿಲ್) | 0 | 0 | 0 | 1 | 0 | 0 | 0 | 0 | 0 | 1 |
| ಒಟ್ಟು | | 802 | 102 | 87 | 33 | 41 | 55 | 92 | 57 | 1134 | 135 |